## ಕರ್ನಾಟಕ ವಿಧಾನ ಪರಿಷತ್ತು

| | | |
|---|---|---|
| ಚುಕ್ಕೆ ಗುರುತಿನ ಪ್ರಶ್ನೆ ಸಂಖ್ಯೆ | : | 882 |
| ಸದಸ್ಯರ ಹೆಸರು | : | ಶ್ರೀ ಯು.ಬಿ.ವೆಂಕಟೇಶ್<br>(ನಾಮ ನಿರ್ದೇಶನ ಹೊಂದಿದವರು) |
| ಉತ್ತರಿಸುವ ದಿನಾಂಕ | : | 10–03–2021. |
| ಉತ್ತರಿಸುವ ಸಚಿವರು | : | ಉಪಮುಖ್ಯಮಂತ್ರಿ<br>ಲೋಕೋಪಯೋಗಿ ಇಲಾಖೆ |

| ಕ್ರ.ಸಂ. | ಪ್ರಶ್ನೆಗಳು | ಉತ್ತರಗಳು |
|---|---|---|
| ಅ) | ಬೆಂಗಳೂರಿನ ಚಾಲುಕ್ಯ ವೃತ್ತದಿಂದ ದೇವನಹಳ್ಳಿ ಅಂತರರಾಷ್ಟ್ರೀಯ ವಿಮಾನ ನಿಲ್ದಾಣಕ್ಕೆ ಸಂಪರ್ಕ ಕಲ್ಪಿಸುವ ರಸ್ತೆ ಉದ್ದೇಶಿತ ಯೋಜನೆ ಯಾವ ಹಂತದಲ್ಲಿದೆ. | • ಬೆಂಗಳೂರಿನ ಚಾಲುಕ್ಯ ವೃತ್ತದಿಂದ ದೇವನಹಳ್ಳಿ ಅಂತರರಾಷ್ಟ್ರೀಯ ವಿಮಾನ ನಿಲ್ದಾಣಕ್ಕೆ ಸಂಪರ್ಕ ಕಲ್ಪಿಸುವ ರಸ್ತೆಯ ಅಭಿವೃದ್ಧಿಗಾಗಿ ರಾಷ್ಟ್ರೀಯ ಹೆದ್ದಾರಿ ವಲಯ ಲೋಕೋಪಯೋಗಿ ಇಲಾಖೆಯ ವ್ಯಾಪ್ತಿಯಿಂದ ಯಾವುದೇ ಯೋಜನೆಯನ್ನು ಕೈಗೊಂಡಿರುವುದಿಲ್ಲ.<br><br>• ಬೆಂಗಳೂರು ಚಾಲುಕ್ಯ ವೃತ್ತದಿಂದ ಹೆಬ್ಬಾಳದ ಫ್ಲೈ ಓವರ್‌ವರೆಗಿನ ರಸ್ತೆಯು ಬೃಹತ್ ಬೆಂಗಳೂರು ಮಹಾನಗರ ಪಾಲಿಕೆ ವ್ಯಾಪ್ತಿಗೆ ಬರುತ್ತದೆ. ಬೃಹತ್ ಬೆಂಗಳೂರು ಮಹಾನಗರ ಪಾಲಿಕೆ ವತಿಯಿಂದ "ಬಿಡಿಎ ವೃತ್ತದಿಂದ ಮೇಖ್ರಿ ಸರ್ಕಲ್‌ವರೆಗಿನ" ರಸ್ತೆಯನ್ನು ಪರಿಷ್ಕೃತ ಮಹಾನಕ್ಷೆ–2015ರ ಅನ್ವಯ 45.00 ಮೀ ಅಗಲಕ್ಕೆ ಅಗಲೀಕರಣಗೊಳಿಸುವ ಯೋಜನೆಯಿದ್ದು, ಟೆಂಡರ್ ಪ್ರಕ್ರಿಯೆಯನ್ನು ಕೈಗೊಂಡು ಸರ್ಕಾರದ ಅನುಮೋದನೆಯೊಂದಿಗೆ ಗುತ್ತಿಗೆದಾರರಿಗೆ ದಿನಾಂಕ: 06.05.2020 ರಂದು ಪಾಲಿಕೆಯು ಕಾರ್ಯಾದೇಶ ನೀಡಿದೆ.<br><br>• ಬೆಂಗಳೂರು ಹೆಬ್ಬಾಳ್ ಫ್ಲೈ ಓವರ್ (ಕಿ.ಮೀ. 556.84) ನಿಂದ ದೇವನಹಳ್ಳಿ (ಕಿ.ಮೀ.534.720) ವರೆಗೆ ಭಾರತೀಯ ರಾಷ್ಟ್ರೀಯ ಹೆದ್ದಾರಿ ಪ್ರಾಧಿಕಾರದ ವ್ಯಾಪ್ತಿಗೆ ಬರುತ್ತದೆ. ಸದರಿ ರಸ್ತೆಯ ಸರಪಳಿ ಕಿ.ಮೀ.534.720 ರಿಂದ ಕಿ.ಮೀ.556.84 ವರೆಗೆ ರಾಷ್ಟ್ರೀಯ ಹೆದ್ದಾರಿ–7 – ಹೈದ್ರಾಬಾದ್– ಬೆಂಗಳೂರು ಹೆದ್ದಾರಿಯ ಭಾಗವಾಗಿರುತ್ತದೆ. ಸದರಿ ಸರಪಳಿಯನ್ನು ಮೇಲ್ದರ್ಜೆಗೇರಿಸಿ, ಕಾರ್ಯಾಚರಣೆ ಹಾಗೂ ನಿರ್ವಹಣೆಯ ಕಾಮಗಾರಿಯನ್ನು Design Build Finance Operate and Transfer (DBFOT) Toll basis under NHDP Phase-VII ಮೂಲಕ ಕೈಗೊಂಡಿದ್ದು 2014ರ ಮೇ ತಿಂಗಳಲ್ಲಿ ಕಾಮಗಾರಿಯು ಪೂರ್ಣಗೊಂಡಿರುತ್ತದೆ ಮತ್ತು ಹೆದ್ದಾರಿಯು ಸುಸ್ಥಿತಿಯಲ್ಲಿರುತ್ತದೆ. |
| ಆ) | ಉದ್ದೇಶಿತ ಯೋಜನೆಯು ನಿಧಾನವಾಗಲು ಕಾರಣಗಳೇನು? | ಪ್ರಸ್ತುತ, ಬಿಡಿಎ ವೃತ್ತದಿಂದ ಮೇಖ್ರಿ ಸರ್ಕಲ್‌ವರೆಗಿನ ಬಳ್ಳಾರಿ ರಸ್ತೆಯನ್ನು ಪರಿಷ್ಕೃತ ಮಹಾನಕ್ಷೆ–2015ರ ಅನ್ವಯ 45.00 ಮೀ ಅಗಲಗೊಳಿಸಲು ಬೆಂಗಳೂರು ಅರಮನೆ ಮೈದಾನದ ಜಾಗವು ಬೇಕಾಗಿದ್ದು, ಪ್ರಸ್ತುತ ಬೆಂಗಳೂರು ಅರಮನೆ ಮೈದಾನದ ಜಾಗವನ್ನು ಭೂ–ಸ್ವಾಧೀನಪಡಿಸಿಕೊಂಡಿರುವ ಪ್ರಕರಣವು ಮಾನ್ಯ ಸರ್ವೋಚ್ಚ ನ್ಯಾಯಾಲಯದ ಮುಂದೆ ಇರುವುದರಿಂದ, ಉದ್ದೇಶಿತ |

| ಕ್ರಸಂ. | ಪ್ರಶ್ನೆಗಳು | ಉತ್ತರಗಳು |
| --- | --- | --- |
| | | ಯೋಜನೆಯು ನಿಧಾನವಾಗಿರುತ್ತದೆ. ಸದರಿ ಭೂಮಿಯನ್ನು ಪಡೆದುಕೊಳ್ಳಲು ಕ್ರಮ ಕೈಗೊಳ್ಳಲಾಗುತ್ತಿದ್ದು, ಮಾನ್ಯ ಸರ್ವೋಚ್ಛ ನ್ಯಾಯಾಲಯದ ಅಂತಿಮ ಆದೇಶ ನಿರೀಕ್ಷಿಸಲಾಗಿದ್ದು, ಸದರಿ ಆದೇಶದನ್ವಯ ಬೃಹತ್ ಬೆಂಗಳೂರು ಮಹಾನಗರ ಪಾಲಿಕೆ ವತಿಯಿಂದ ಕಾಮಗಾರಿಯನ್ನು ಪ್ರಾರಂಭಿಸಲು ಕ್ರಮ ಕೈಗೊಳ್ಳಲಾಗುವುದು. |

ಕಡತ ಸಂಖ್ಯೆ:ಲೋಇ 72 ಸಿಎನ್‌ಹೆಚ್ 2021 (ಇ)

(ಗೋವಿಂದ.ಎಂ.ಕಾರಜೋಳ)
ಉಪಮುಖ್ಯಮಂತ್ರಿ
ಲೋಕೋಪಯೋಗಿ ಇಲಾಖೆ